ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಪಡಿತರ ಚೀಟಿ ವಿತರಣೆ ಸೀಮೆಎಣ್ಣೆ ವಿತರಣೆ ಕುರಿತು

ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

078 (783) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಸರ್ವರ್ ಸಮಸ್ಯೆಗಳಿಂದ ಆನ್‌ಲೈನ್ ಮುಖಾಂತರ ಪಡಿತರ ಚೀಟಿ ಪಡೆಯಲು ತೊಂದರೆಯಾಗುತ್ತಿದ್ದು, ವರ್ಗಾವಣೆ/ವಿಳಾಸ ಬದಲಾವಣೆ/ತಿದ್ದುಪಡಿ ಹೆಸರು ಸೇರ್ಪಡೆ ಮಾಡಲು ಸಾಧ್ಯವಾಗದಿರುವ ಬಗ್ಗೆ ದೂರುಗಳಿದ್ದು, ಈ ಬಗ್ಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ; (ಮಾಹಿತಿ ನೀಡುವುದು)

(ಆ) 1 ಲೀಟರ್ ಸೀಮೆಎಣ್ಣೆ ವಿತರಿಸಲು ಅವಕಾಶಗಳಿದ್ದು, ಸಮರ್ಪಕವಾದ ಹೆಬ್ಬೆಟ್ಟು ಗುರುತು ಪಡೆದು ತೆಗೆದುಕೊಳ್ಳಲು ಸರಿಯಾದ ವ್ಯವಸ್ಥೆ ಇಲ್ಲದಿರುವುದರಿಂದ ಬಡ-ಸಾರ್ವಜನಿಕರು ವಂಚನೆಗೆ/ತೊಂದರೆಗೆ ಸಿಲುಕುತ್ತಿರುವುದರಿಂದ ಈ ಸಮಸ್ಯೆಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ?